ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಗುರುವಾರ, ದಿನಾಂಕ: 18ನೇ ಜುಲೈ, 2019

ರಾಜ್ಯದಲ್ಲಿ ಖಾಸಗಿ ಸಂಸ್ಥೆಗಳ ಬಸ್‌ಗಳು ಮತ್ತು ಹೆಚ್ಚುವರಿ ದರದ ಕುರಿತು

ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಹಾಗೂ

ಶ್ರೀ ಎನ್ ರವಿಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು:-

318 (411+197) ಮಾನ್ಯ ಸಾರಿಗೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಎಷ್ಟು ಜಿಲ್ಲೆಗಳಲ್ಲಿ ಖಾಸಗಿ ಸಂಸ್ಥೆಗಳ ಬಸ್‌ಗಳು ಸಂಚರಿಸುತ್ತಿವೆ; (ಆ ಸಂಸ್ಥೆಗಳ ಹೆಸರು ಹಾಗು ಮಾಲೀಕರ ಹೆಸರು ಸಹಿತ ವಿವರ ನೀಡುವುದು) ಅವರಿಗೆ ಮಂಜೂರಾದ ಮಾರ್ಗಗಳು ಯಾವುವು; (ವಿವರ ನೀಡುವುದು)

(ಆ) ಖಾಸಗಿ ಸಾರಿಗೆ ಸಂಸ್ಥೆಯವರು ಹಬ್ಬದ ದಿನಗಳಂದು ಮತ್ತು ಸರ್ಕಾರಿ ರಜೆ ದಿನಗಳಂದು ಸಂಚರಿಸುವ ಬಸ್ಸುಗಳ ಟಿಕೇಟ್ ದರಗಳನ್ನು ವಿಪರೀತವಾಗಿ ಹೆಚ್ಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಕುರಿತು ಸರ್ಕಾರ ಯಾವ ಕ್ರಮಕೈಗೊಂಡಿದೆ;

(ಇ) ಅನುಮತಿ ಕೊಡುವಾಗ ವಿಧಿಸಿದಂತಹ ನಿಯಮಗಳೇನು; ನಿಯಮಗಳನ್ನು ಸದರಿ ಸಂಸ್ಥೆಗಳು ಪಾಲಿಸುತ್ತಿವೆಯೇ; ಪಾಲಿಸದಿದ್ದ ಎಷ್ಟು ಸಂಸ್ಥೆಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ;

(ಈ) ಹಬ್ಬ-ಹರಿದಿನಗಳಲ್ಲಿ ಮತ್ತು ಸರ್ಕಾರಿ ರಜೆ ದಿನಗಳಲ್ಲಿ 5 ರಿಂದ 10 ಪಟ್ಟು ದರವನ್ನು ಹೆಚ್ಚು ಮಾಡಿ ಜನರಿಗೆ ಆರ್ಥಿಕ ತೊಂದರೆ ಹಾಗೂ ಹಿಂಸೆ ಕೊಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಏನು ಕ್ರಮ ಕೈಗೊಂಡಿದೆ; ಈ ರೀತಿ ಟಿಕೇಟ್ ದರ ಏರಸಿರುವ ಎಷ್ಟು ಬಸ್ಸುಗಳ ಪರವಾಗಿಯನ್ನು ರದ್ದುಗೊಳಿಸಲಾಗಿದೆ;

(ಉ) ಇದೇ ಪದ್ದತಿಯನ್ನು ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಅನುಸರಿಸುತ್ತಿರುವುದು ನಿಜವೇ; ನಿಜವಿದ್ದಲ್ಲಿ ಕಾರಣಗಳೇನು;

(ಊ) ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಎಷ್ಟು ಸರ್ಕಾರಿ ಬಸ್ಸುಗಳನ್ನು ಲೋಕಲ್ಸಾರಿಗೆ ಬಸ್ಸುಗಳನ್ನಾಗಿ ಬಳಸಲಾಗುತ್ತಿದೆ? (ಜಿಲ್ಲಾವಾರು ಮಾಹಿತಿ ನೀಡುವುದು)